## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2016 |
| ಸದಸ್ಯರ ಹೆಸರು | : | ಶ್ರೀ ಕೆ.ಹರೀಶ್ ಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | : | 24-03-2021. |
| ಉತ್ತರಿಸುವ ಸಚಿವರು | : | ಮಾನ್ಯ ಉಪಮುಖ್ಯಮಂತ್ರಿಗಳು, ಲೋಕೋಪಯೋಗಿ ಇಲಾಖೆ |

| ಕ್ರಸಂ | ಪ್ರಶ್ನೆ | ಉತ್ತರಗಳು |
|---|---|---|
| ಅ) | ದಕ್ಷಿಣ ಕನ್ನಡ ಜಿಲ್ಲಾ ವ್ಯಾಪ್ತಿಯಲ್ಲಿ ಬರುವ ಬಿ.ಸಿ. ರೋಡ್-ಅಡ್ಡಹೊಳೆ ರಾಷ್ಟ್ರೀಯ ಹೆದ್ದಾರಿ ಎನ್.ಹೆಚ್-75 ಕಾಮಗಾರಿಯು ಕಳೆದ ಎರಡು ವರ್ಷಗಳಿಂದ ಯಾವುದೇ ಪ್ರಗತಿ ಕಾಣದೇ ಸ್ಥಗಿತಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ, ದಕ್ಷಿಣ ಕನ್ನಡ ಜಿಲ್ಲಾ ವ್ಯಾಪ್ತಿಯಲ್ಲಿ ಬರುವ ಬಿ.ಸಿ.ರೋಡ್-ಅಡ್ಡಹೊಳೆ ರಾಷ್ಟ್ರೀಯ ಹೆದ್ದಾರಿ ಎನ್.ಹೆಚ್-75 ಕಾಮಗಾರಿಯನ್ನು ಮೆ: ಎಲ್ & ಟಿ ರವರಿಗೆ 2017ರಲ್ಲಿ ಗುತ್ತಿಗೆಯನ್ನು ನೀಡಲಾಗಿತ್ತು, ಅದರೆ ಸದರಿ ಕಾಮಗಾರಿಯು ಅವಧಿ ಪೂರ್ವ ಮುಕ್ತಾಯವಾಗಿರುತ್ತದೆ (Foreclosed) ಎಂದು ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರ ರವರು ವರದಿ ಮಾಡಿರುತ್ತಾರೆ. |
| ಆ) | ಬಂದಿದ್ದಲ್ಲಿ, ಸದರಿ ರಸ್ತೆ ಕಾಮಗಾರಿಯನ್ನು ತ್ವರಿತವಾಗಿ ಮುಗಿಸಲು ಸರ್ಕಾರ ಕೈಗೊಂಡ ಕ್ರಮಗಳೇನು; ಇದುವರೆಗೆ ಬಿಡುಗಡೆಯಾದ ಅನುದಾನವೆಷ್ಟು? (ಗುತ್ತಿಗೆದಾರರ ವಿವರ ಕಾಮಗಾರಿಯ ಪ್ರಗತಿ ಕುರಿತಂತೆ ಅಂಕಿ ಅಂಶದೊಂದಿಗೆ ಸಂಪೂರ್ಣ ಮಾಹಿತಿ ಒದಗಿಸುವುದು) | ಸದರಿ ಕಾಮಗಾರಿಯನ್ನು ಅವಧಿ ಪೂರ್ವ ಮುಕ್ತಾಯವಾದ (Foreclosed) ನಂತರ ರಾಷ್ಟ್ರೀಯ ಹೆದ್ದಾರಿ-75ರಲ್ಲಿ ಪೆರಿಯಾಶಾಂತಿಯಿಂದ ಅಡ್ಡಹೊಳೆ (ಗುಂಡ್ಯ ಕ್ರಾಸ್) ವರೆಗೆ ಹಾಗೂ ಪೆರಿಯಾಶಾಂತಿಯಿಂದ ಬಂಟವಾಳದವರೆಗೆ 2 ಪ್ಯಾಕೇಜ್‌ಗಳಾಗಿ ವಿಂಗಡಿಸಲಾಗಿದೆ. ಗುತ್ತಿಗೆದಾರರ ವಿವರ ಕಾಮಗಾರಿಯ ಪ್ರಗತಿ ಕುರಿತಂತೆ ಈ ಕೆಳಕಂಡಂತೆ ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರ ರವರು ವರದಿಸಿರುತ್ತಾರೆ.<br>1. ರಾ.ಹೆ-75ರಲ್ಲಿ ಪೆರಿಯಾಶಾಂತಿಯಿಂದ ಅಡ್ಡಹೊಳೆ (ಗುಂಡ್ಯ ಕ್ರಾಸ್) ವರೆಗಿನ ಕಾಮಗಾರಿಗೆ ರೂ.544.02 ಕೋಟಿಗಳ ಅಂದಾಜು ಪಟ್ಟಿಗೆ ಅನುಮೋದನೆ ದೊರೆತಿರುತ್ತದೆ. ಟೆಂಡರ್ ಕರೆಯಲಾಗಿದ್ದು, 12 ಮಂದಿ ಗುತ್ತಿಗೆದಾರರು ಟೆಂಡರ್‌ನಲ್ಲಿ ಭಾಗವಹಿಸಿರುತ್ತಾರೆ. ತಾಂತ್ರಿಕ ಬಿಡ್ಡ್ ಪರಿಶೀಲನೆ ಯಲ್ಲಿರುತ್ತದೆ.<br>2. ರಾ.ಹೆ-75ರಲ್ಲಿ ಪೆರಿಯಾಶಾಂತಿಯಿಂದ ಬಂಟವಾಳದ ವರೆಗಿನ ಕಾಮಗಾರಿಗೆ ರೂ.1480.00 ಕೋಟಿಗಳ ಅಂದಾಜು ಪಟ್ಟಿಗೆ ಅನುಮೋದನೆ ದೊರೆತಿರುತ್ತದೆ. ಟೆಂಡರ್ ಪ್ರಕ್ರಿಯೆ ಪೂರ್ಣಗೊಂಡಿದ್ದು ಮೆ: ಕೆ.ಎನ್.ಆರ್ ಕನ್‌ಸ್ಟ್ರಕ್ಷನ್ಸ್ ರವರಿಗೆ ದಿನಾಂಕ: 22.03.2021 ರಂದು ರೂ.1100.88 ಕೋಟಿಗಳಿಗೆ ಎಲ್.ಓ.ಎ. ಯನ್ನು ನೀಡಲಾಗಿದೆ. |

ಕಡತ ಸಂಖ್ಯೆ: ಲೋಇ 114 ಸಿಎನ್‌ಹೆಚ್ 2021 (ಇ)

(ಗೋವಿಂದ ಎಂ. ಕಾರಜೋಳ)
ಉಪ ಮುಖ್ಯಮಂತ್ರಿಗಳು
ಲೋಕೋಪಯೋಗಿ ಇಲಾಖೆ